ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ರಾಜ್ಯದಲ್ಲಿ ಹೆಚ್ಚಾಗುತ್ತಿರುವ ಬಾಲ್ಯವಿವಾಹಗಳ ಬಗ್ಗೆ

ಡಾ|| ಜಯಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು):-

301 (471) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಕಳೆದ 5 ವರ್ಷಗಳಲ್ಲಿ ಎಷ್ಟು ಬಾಲ್ಯವಿವಾಹಗಳಾಗಿವೆ; (ಜಿಲ್ಲಾವಾರು ವಿವರ ನೀಡುವುದು) ಎಷ್ಟು ಪ್ರಕರಣಗಳು ಈ ಕುರಿತು ದಾಖಲಾಗಿವೆ; ಎಷ್ಟು ಜನರಿಗೆ ಈ ಕಾಯ್ದೆಯಡಿ ಕಾನೂನು ಕ್ರಮ ಜರುಗಿಸಲಾಗಿದೆ; (ವಿವರ ನೀಡುವುದು) ಎಷ್ಟು ಹೆಣ್ಣು ಮಕ್ಕಳನ್ನು ಬಾಲ್ಯವಿವಾಹಕ್ಕೆ ಒಳಗಾಗುತ್ತಿರುವ ಸಂದರ್ಭದಲ್ಲಿ ರಕ್ಷಿಸಲಾಗಿದೆ; ಮತ್ತು ಅವರ ಮುಂದಿನ ಜೀವನ ಮಟ್ಟಕ್ಕೆ ಏನು ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) ಜಿಲ್ಲಾ ಮಟ್ಟದ ಸಮೀಕ್ಷೆಯನ್ನು ಎಲ್ಲಿಯವರೆವಿಗೆ ನಡೆಸಲಾಗಿದೆ;

(ಆ) ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನಲ್ಲಿ ಇಲ್ಲಿಯವರೆಗೆ ಆದ ಬಾಲ್ಯವಿವಾಹಗಳೆಷ್ಟು; (ಗ್ರಾಮ ಪಂಚಾಯಿತಿವಾರು ವಿವರ ನೀಡುವುದು)

(ಇ) ಬಾಲ್ಯವಿವಾಹಗಳನ್ನು ಮಾಡಿದ ಎಷ್ಟು ಪಾಲಕರು ಮತ್ತು ಸಂಬಂಧಿಸಿದ ವ್ಯಕ್ತಿಗಳ/ಅರ್ಚಕರ ಮೇಲೆ ಪ್ರಕರಣ ದಾಖಲಿಸಲಾಗಿದೆ; ಹಾಗೂ ಎಷ್ಟು ಜನರಿಗೆ ಶಿಕ್ಷೆ ವಿಧಿಸಲಾಗಿದೆ? (ವಿವರ ನೀಡುವುದು)